# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಪಿ.ಆರ್ ರಮೇಶ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1563

ಉತ್ತರಿಸಬೇಕಾದ ದಿನಾಂಕ : 24.09.2021

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 2 ವರ್ಷಗಳಿಂದ ಕರೋನ ವೈರಾಣು ರೋಗದ ಬಾಧೆ ಮತ್ತು ಪ್ರಕೃತಿ ವೈಫಲ್ಯದ ಹಿನ್ನಲೆಯಲ್ಲಿ ಸಂಕಷ್ಟ ಅನುಭವಿಸುತ್ತಿರುವ ರಾಜ್ಯದ ರೈತರಿಗೆ ಕೆಲವು ಜಿಲ್ಲೆಗಳ ಸರ್ಕಾರಿ/ಅರೆ ಸರ್ಕಾರಿ/ಸಹಕಾರಿ ಬ್ಯಾಂಕ್‌ನವರು ಸಾಲ ನೀಡಿ, ನೀಡಿದ ಸಾಲಕ್ಕೆ ಅಕ್ರಮವಾಗಿ ಅಧಿಕ ಮೊತ್ತದ ಬಡ್ಡಿಯನ್ನು ವಿಧಿಸಿ, ವಸೂಲು ಮಾಡುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದಲ್ಲಿ ಸರ್ಕಾರದ ಕ್ರಮವೇನು;(ವಿವರ ನೀಡುವುದು) | **ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ**<br><br>ಅಕ್ರಮವಾಗಿ ಅಧಿಕ ಬಡ್ಡಿ ವಿಧಿಸುತ್ತಿರುವುದು ಕಂಡುಬಂದಿರುವುದಿಲ್ಲ.<br><br>ಆದರೆ, ಬೆಳಗಾವಿ, ಬಳ್ಳಾರಿ, ಚಿಕ್ಕಮಗಳೂರು, ಹಾಸನ, ಕೊಡಗು, ಕೋಲಾರ ಮತ್ತು ಚಿಕ್ಕಾಬಳ್ಳಾಪುರ, ಮೈಸೂರು, ಮತ್ತು ಶಿವಮೊಗ್ಗ ಡಿಸಿಸಿ ಬ್ಯಾಂಕಿನ ವ್ಯಾಪ್ತಿಯಲ್ಲಿ ಬರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು 2020-21 ರಲ್ಲಿ ರೂ.3.00 ಲಕ್ಷಗಳಿಗಿಂತ ಹೆಚ್ಚಿನ ಸಾಲ ಪಡೆದ ರೈತರಿಂದ 2021-22 ನೇ ಸಾಲಿನಲ್ಲಿ ಬ್ಯಾಂಕಿನ/ಸಂಘಗಳ ಸಾಮಾನ್ಯ ಬಡ್ಡಿ ದರವನ್ನು ಆಕರಣೆ ಮಾಡುತ್ತಿವೆ. (ಡಿಸಿಸಿ ಬ್ಯಾಂಕುವಾರು ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ.)<br><br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br><br>ರಾಜ್ಯ ಮಟ್ಟದ ಬ್ಯಾಂಕರುಗಳ ಸಮಿತಿಯ ಸಂಚಾಲಕರಿಂದ ಬಂದ ಮಾಹಿತಿಯ ಪ್ರಕಾರ ರಾಜ್ಯ ಮಟ್ಟದ ಬ್ಯಾಂಕರುಗಳ ಸಮಿತಿಗೆ ನೇರವಾಗಿ ಅಥವಾ ಜಿಲ್ಲಾ ಲೀಡ್ ಪ್ರಬಂಧಕರ ಮೂಲಕ ರಾಷ್ಟ್ರೀಕೃತ ಬ್ಯಾಂಕುಗಳು, ಖಾಸಗಿ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು, ಸ್ಮಾಲ್ ಫೈನಾನ್ಸ್ ಬ್ಯಾಂಕುಗಳು ರಾಜ್ಯದ ರೈತರಿಗೆ ನೀಡಿದ ಸಾಲಗಳಿಗೆ ಅಕ್ರಮವಾಗಿ ಅಧಿಕ ಮೊತ್ತದ ಬಡ್ಡಿಯನ್ನು ವಿಧಿಸಿ, ವಸೂಲಾತಿ ಮಾಡುತ್ತಿರುವ ವಿಷಯದ ಬಗ್ಗೆ ಯಾವುದೇ ದೂರುಗಳು ಬಂದಿರುವುದಿಲ್ಲ. |

| | | |
|---|---|---|
| ಆ) | ರಾಜ್ಯದ ಕೋಲಾರ, ಚಿಕ್ಕಬಳ್ಳಾಪುರ ಮತ್ತು ಹಲವು ಜಿಲ್ಲೆಗಳಲ್ಲಿ ರೈತರಿಗೆ ಕಿಸಾನ್ ಕ್ರೆಡಿಟ್ ಸಾಲದ ಮುಖಾಂತರ ಸಾಲ ನೀಡಿ ಅಧಿಕ ಮೊತ್ತದ ಬಡ್ಡಿ ವಸೂಲಾತಿ ಮಾಡುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | **<u>ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ</u>**<br><br>ಇಲ್ಲ.<br><br>ಸಹಕಾರ ಸಂಘಗಳಲ್ಲಿ ಶೂನ್ಯ ಬಡ್ಡಿ ದರ ರೂ.3.00 ಲಕ್ಷಗಳ ವರೆಗೆನ ಕೃಷಿ ಸಾಲ ವಿತರಿಸಲಾಗುತ್ತಿದೆ. |
| | (ವಿವರ ನೀಡುವುದು) | ಕೋಲಾರ ಮತ್ತು ಚಿಕ್ಕಬಳ್ಳಾಪುರ ಹಾಗೂ ಬೆಳಗಾವಿ, ಬಳ್ಳಾರಿ, ಚಿಕ್ಕಮಗಳೂರು, ಹಾಸನ, ಕೊಡಗು, , ಮೈಸೂರು, ಶಿವಮೊಗ್ಗ ಡಿಸಿಸಿ ಬ್ಯಾಂಕಿನ ವ್ಯಾಪ್ತಿಯಲ್ಲಿ ಬರುವ ಶಾಖೆಗಳು ಮತ್ತು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು 2020-21 ರಲ್ಲಿ ರೂ.3.00 ಲಕ್ಷಗಳಿಗಿಂತ ಹೆಚ್ಚಿನ ಸಾಲ ಪಡೆದ ರೈತರಿಂದ 2021-22 ನೇ ಸಾಲಿನಲ್ಲಿ ಬ್ಯಾಂಕಿನ/ಸಂಘಗಳ ಸಾಮಾನ್ಯ ಬಡ್ಡಿ ದರ ವಸೂಲು ಮಾಡುತ್ತಿರುತ್ತವೆ.<br><br>ಈ ಪೈಕಿ ಕೊಡಗು, ಮೈಸೂರು ಮತ್ತು ಶಿವಮೊಗ್ಗ ಡಿಸಿಸಿ ಬ್ಯಾಂಕ್ ಹೊರತುಪಡಿಸಿ ಉಳಿದ ಡಿಸಿಸಿ ಬ್ಯಾಂಕುಗಳು ಕೇಂದ್ರ ಸರ್ಕಾರ ರೂ.3.00 ಲಕ್ಷಗಳ ವರೆಗಿನ ಸಾಲಕ್ಕೆ ಅವಧಿಯೊಳಗೆ ಮರುಪಾವತಿಸಿದ ರೈತರಿಗೆ ನೀಡುವ ಶೇ.3 ರ ಪ್ರೋತ್ಸಾಹಧನವನ್ನು ನಬಾರ್ಡ್ ಮೂಲಕ ಕ್ಲೇಮು ಮಾಡುತ್ತಿದ್ದು, ಅನುದಾನ ಬಿಡುಗಡೆಯಾದ ನಂತರ ರೈತರ ಖಾತೆಗಳಿಗೆ ವಾಪಸ್ ನೀಡಲಾಗುವುದು.<br><br>ಡಿಸಿಸಿ ಬ್ಯಾಂಕುವಾರು ರೂ.3 ಲಕ್ಷಗಳಿಗಿಂತ ಹೆಚ್ಚಿನ ಸಾಲ ವಿತರಿಸಿದ ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ.<br><br>**<u>ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ</u>**<br><br>ರಾಜ್ಯ ಮಟ್ಟದ ಬ್ಯಾಂಕರುಗಳ ಸಮಿತಿಯ ಸಂಚಾಲಕರಿಂದ ಬಂದ ಮಾಹಿತಿಯ ಪ್ರಕಾರ ರಾಜ್ಯ ಮಟ್ಟದ ಬ್ಯಾಂಕರುಗಳ ಸಮಿತಿಗೆ ನೇರವಾಗಿ ಅಥವಾ ಲೀಡ್ ಜಿಲ್ಲಾ ಪ್ರಬಂಧಕರು ಕೋಲಾರ, ಚಿಕ್ಕಬಳ್ಳಾಪುರ ಮತ್ತು ಇತರ ಜಿಲ್ಲೆಗಳಿಂದ ರಾಷ್ಟ್ರೀಕೃತ ಬ್ಯಾಂಕುಗಳು, ಖಾಸಗಿ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು, ಸ್ಮಾಲ್ ಫೈನಾನ್ಸ್ ಬ್ಯಾಂಕುಗಳು ರಾಜ್ಯದ ರೈತರಿಗೆ ಕಿಸಾನ್ ಕ್ರೆಡಿಟ್ ಸಾಲದ ಮೇಲೆ ಅಧಿಕ ಮೊತ್ತದ ಬಡ್ಡಿ ವಸೂಲಾತಿ ಮಾಡುತ್ತಿರುವ ವಿಷಯದ ಬಗ್ಗೆ ಯಾವುದೇ ದೂರುಗಳು ಬಂದಿರುವುದಿಲ್ಲ. |

| | | |
|---|---|---|
| ಇ) | ಅನ್ನದಾತರನ್ನು ಈ ಅಕ್ರಮ ಬಡ್ಡಿ ಸುಳಿಯಿಂದ ತಪ್ಪಿಸಲು ಸರ್ಕಾರದ ನಿಲುವೇನು? (ಸ್ಪಷ್ಟವಾದ ಮಾಹಿತಿಯನ್ನು ನೀಡುವುದು) | **ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ**<br><br>2020–21 ನೇ ಸಾಲಿನಲ್ಲಿ ಸಹಕಾರ ಸಂಘಗಳ ಮೂಲಕ 25.12 ಲಕ್ಷ ರೈತರಿಗೆ ರೂ.15,802.00 ಕೋಟಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ವಿತರಿಸುವ ಗುರಿ ಹೊಂದಲಾಗಿದ್ದು, 26.19 ಲಕ್ಷ ರೈತರಿಗೆ ರೂ.17,901.21 ಕೋಟಿ ಸಾಲ ವಿತರಿಸಲಾಗಿದ್ದು, ಶೇ.114 ರಷ್ಟು ಸಾಧನೆ ಮಾಡಲಾಗಿದೆ.<br><br>2021–22 ನೇ ಸಾಲಿನಲ್ಲಿ ಸಹಕಾರ ಸಂಘಗಳ ಮೂಲಕ 30.86 ಲಕ್ಷ ರೈತರಿಗೆ ರೂ.20,810.00 ಕೋಟಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ವಿತರಿಸುವ ಗುರಿ ಹೊಂದಲಾಗಿದೆ.<br><br>ಈ ರೀತಿ 5.74 ಲಕ್ಷ ಹೊಸ ರೈತರಿಗೆ ರೂ. 2,908.79 ಕೋಟಿ ಕೃಷಿ ಸಾಲ ವಿತರಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದ್ದು, ಆಗಸ್ಟ್ ಅಂತ್ಯದವರೆಗೆ 11.69 ಲಕ್ಷ ರೈತರಿಗೆ ರೂ.8,455.59 ಕೋಟಿ ಕೃಷಿ ಸಾಲ ವಿತರಿಸಲಾಗಿದೆ.<br><br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br><br>ರೈತರಿಗೆ ಕೃಷಿ ಸಾಲ ಮತ್ತು ಕಿಸಾನ್ ಕ್ರೆಡಿಟ್ ಸಾಲಗಳ ಮೇಲೆ ಅಕ್ರಮ ಬಡ್ಡಿ ವಸೂಲಾತಿ ಮಾಡುತ್ತಿರುವ ಬಗ್ಗೆ ದೂರುಗಳು ಸ್ವೀಕೃತವಾದಲ್ಲಿ, ಸಂಬಂಧಪಟ್ಟ ಬ್ಯಾಂಕುಗಳೊಂದಿಗೆ, ರಾಜ್ಯ ಮಟ್ಟದ ಬ್ಯಾಂಕರುಗಳ ಸಮಿತಿಯ ಸಂಚಾಲಕರೊಂದಿಗೆ ಹಾಗೂ ಭಾರತೀಯ ರಿಸರ್ವ್ ಬ್ಯಾಂಕ್‌ನೊಂದಿಗೆ ಪತ್ರ ವ್ಯವಹಾರ ಮಾಡಿ ಸಮಸ್ಯೆಯನ್ನು ಪರಿಹರಿಸಲು ಕ್ರಮವಹಿಸಲಾಗುವುದು. |

**ಸಂಖ್ಯೆ: ಸಿಒ 296 ಸಿಎಲ್ಎಸ್ 2021**

(ಎಸ್.ಟಿ ಸೋಮಶೇಖರ್)

**ಸಹಕಾರ ಸಚಿವರು**

ಮಾನ್ಯವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1087 ಕ್ಕೆ ಅನುಬಂಧ

ದಿ.1-4-2021 ರಿಂದ ದಿ.31-3-2021 ರ ವರೆಗೆ ಸಹಕಾರ ಸಂಘಗಳು ಅಲ್ಪಾವಧಿ ಬೆಳೆ ಸಾಲ ವಿತರಿಸಿದ ವಿವರ

(ರೂ.ಲಕ್ಷಗಳಲ್ಲಿ)

| Sl No | Name of DCC Bank | Up to Rs 1 lakh | | Rs 1 lakh to Rs 2 lakhs | | Rs 2 lakh to Rs 3 lakhs | | Above Rs 3 lakhs | | | Total | |
|---|---|---|---|---|---|---|---|---|---|---|---|---|
| | | Number | Amount | Number | Amount | Number | Amount | Number | Amount | Rate of interest | Number | Amount |
| 1 | Bagalkot | 210859 | 93893.64 | 23651 | 32114.79 | 759 | 1633.82 | 0 | 0.00 | | 235269 | 127642.25 |
| 2 | Bangalore | 97617 | 54459.62 | 716 | 895.60 | 0 | 0.00 | 0 | 0.00 | | 98333 | 55355.22 |
| 3 | Belgaum | 393312 | 147296.20 | 23226 | 32714.66 | 16769 | 43695.31 | 11 | 42.56 | 10.50 | 433318 | 223748.73 |
| 4 | Bellary | 69572 | 41939.02 | 16639 | 22565.03 | 3420 | 8446.40 | 11 | 91.63 | 10.50 | 89642 | 73042.08 |
| 5 | Bidar | 140126 | 58663.37 | 9989 | 13822.59 | 4364 | 11589.34 | 0 | 0.00 | | 154479 | 84075.30 |
| 6 | Bijapur | 220637 | 109474.21 | 322 | 560.98 | 4801 | 13339.99 | 0 | 0.00 | | 225760 | 123375.18 |
| 7 | Chikmagalur | 9963 | 6125.23 | 24063 | 39823.65 | 8872 | 24470.65 | 112 | 923.68 | 10.00 | 43010 | 71343.21 |
| 8 | Chitradurga | 46403 | 22537.89 | 3666 | 5301.98 | 633 | 1671.35 | 0 | 0.00 | | 50702 | 29511.22 |
| 9 | Davangere | 83624 | 26008.22 | 11936 | 14925.37 | 3971 | 8934.75 | 0 | 0.00 | | 99531 | 49868.34 |
| 10 | Dharwad | 73776 | 23240.32 | 14823 | 15023.46 | 2415 | 5224.15 | 0 | 0.00 | | 91014 | 43487.93 |
| 11 | Gulburga | 40538 | 10946.19 | 719 | 1821.97 | 84 | 368.87 | 0 | 0.00 | | 41341 | 13137.03 |
| 12 | Hassan | 139118 | 66056.94 | 4556 | 6815.96 | 1096 | 2690.36 | 2 | 17.00 | 9.10 | 144772 | 75580.26 |
| 13 | Kanara | 39845 | 29030.61 | 29560 | 17285.05 | 11714 | 20567.48 | 0 | 0.00 | | 81119 | 66883.14 |
| 14 | Kodagu | 15525 | 10339.73 | 10894 | 16199.05 | 11026 | 30171.05 | 484 | 1764.59 | 9.15 | 37929 | 58474.42 |
| 15 | Kolar | 26085 | 22212.38 | 6362 | 10747.74 | 3034 | 7440.84 | 2489 | 2141.55 | 10.00 | 37970 | 42542.51 |
| 16 | Mandya | 125757 | 60704.42 | 9258 | 12346.13 | 1787 | 4511.11 | 0 | 0.00 | | 136802 | 77561.66 |
| 17 | Mysore | 55647 | 32226.19 | 18803 | 27164.98 | 5908 | 15486.60 | 7 | 35.00 | 9.10 | 80365 | 74912.77 |
| 18 | Raichur | 101723 | 44379.18 | 20908 | 9372.00 | 357 | 1378.24 | 0 | 0.00 | | 122988 | 55129.42 |
| 19 | S.Canara | 85049 | 62150.95 | 33854 | 51423.90 | 17494 | 46029.52 | 0 | 0.00 | | 136397 | 159604.37 |
| 20 | Shimoga | 79459 | 44637.51 | 12881 | 19990.81 | 5723 | 14727.50 | 7 | 36.60 | 11.00 | 98070 | 79392.42 |
| 21 | Tumkur | 105885 | 45859.85 | 3670 | 4664.06 | 576 | 1478.38 | 0 | 0.00 | | 110131 | 52002.29 |
| | **Total** | **2160520** | **1012181.68** | **280496** | **355579.76** | **104803** | **263855.71** | **3123** | **5052.61** | | **2548942** | **1636669.75** |